# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 523 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 21/02/2022 |
| 4) | ಉತ್ತರಿಸುವವರು<br>ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಅನುದಾನ ರಹಿತ ಐ.ಟಿ.ಐ ತರಬೇತಿ ಕೇಂದ್ರಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿರುವ ಅನುದಾನ ರಹಿತ ಐ.ಟಿ.ಐ ತರಬೇತಿ ಕೇಂದ್ರಗಳ ಸಂಖ್ಯೆ ಒಟ್ಟು-1030 |
| ಆ) | ಸದರಿ ಐ.ಟಿ.ಐ. ತರಬೇತಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ವೇತನಾನುದಾನ ಇಲ್ಲದೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಸರ್ಕಾರವು ವೇತನ ಸಹಾಯಾನುದಾನ ನೀಡಿಲ್ಲದ ಸಂಸ್ಥೆ / ವೃತ್ತಿ / ಘಟಕಗಳಿಗೆ ಕೆಲವು ಷರತ್ತುಗಳಿಗೊಳಪಡಿಸಿ ವಿದ್ಯಾರ್ಥಿ ಕೇಂದ್ರೀಕೃತ ಅನುದಾನ ನೀಡುವ ಪದ್ಧತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಕಾಇ 118 ಇಟಿಐ 2010 ದಿನಾಂಕ: 30/8/2010ರ ಮೂಲಕ ಜಾರಿಗೊಳಿಸಿದ್ದು, ಸದರಿ ಕಾರ್ಯಕ್ರಮದ ಮೂಲಕ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಅನುದಾನ ಪಡೆಯಬಹುದಾಗಿದೆ. |
| ಇ) | ಯಾವ ಕಾಲಮಿತಿಯಲ್ಲಿ ವೇತನಾನುದಾನ ನೀಡಲಾಗುವುದು; | ಹೊಸದಾಗಿ ಯಾವುದೇ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸಿಬ್ಬಂದಿ ಆಧಾರಿತ ವೇತನಾನುದಾನ ಪದ್ಧತಿಗೆ ಒಳಪಡಿಸದಿರಲು ಆದೇಶ ಸಂಖ್ಯೆ: ಕಾಇ 284 ಇಟಿಐ 2005, ದಿನಾಂಕ: 21.08.2010ರಲ್ಲಿ ನಿರ್ದೇಶಿಸಿರುವುದರಿಂದ, ಇನ್ನು ಮುಂದೆ ಯಾವುದೇ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ವೇತನ ಸಹಾಯಾನುದಾನಕ್ಕೆ ಒಳಪಡಿಸುವುದಿಲ್ಲ. |
| ಈ) | ಕೆ.ಪಿ.ಎಸ್.ಸಿ ಮೂಲಕ ಎಷ್ಟು ಜೆ.ಟಿ.ಓ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳಲು ಸರ್ಕಾರ ಅನುಮತಿ ನೀಡಿದೆ; | 1520 ಕಿರಿಯ ತರಬೇತಿ ಅಧಿಕಾರಿ (ಜೆಟಿಓ) ಹುದ್ದೆಗಳನ್ನು ಆಯ್ಕೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ. |
| ಉ) | ಯಾವಾಗ ಅನುಮತಿ ನೀಡಲಾಯಿತು; ವಿಳಂಬವಾಗಲು ಕಾರಣಗಳೇನು; | 1520 ಜೆಟಿಓ (ಕಿತಅ) ಹುದ್ದೆಗಳನ್ನು ಆಯ್ಕೆ ಮಾಡಿಕೊಡುವಂತೆ ದಿನಾಂಕ: 19/12/2017 ರಂದು ಕೆಪಿಎಸ್‌ಸಿಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಕೆಪಿಎಸ್‌ಸಿಯಿಂದ ದಿನಾಂಕ: 19/02/2018 ರಂದು ನೇಮಕಾತಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br>ಈ ಮೊದಲು ಅಭ್ಯರ್ಥಿಯ ಶೈಕ್ಷಣಿಕ ಅಂಕಪಟ್ಟಿಯಲ್ಲಿನ ಅಂಕಗಳನ್ನು ಪರಿಗಣಿಸಿ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸಲಾಗುತ್ತಿತ್ತು. ಇದೇ ಮೊದಲ ಬಾರಿಗೆ 23 ವೃತ್ತಿಗಳ ಕಿರಿಯ ತರಬೇತಿ ಅಧಿಕಾರಿ ಹುದ್ದೆಗೆ ಕರ್ನಾಟಕ ಲೋಕಸೇವಾ ಆಯೋಗವು ಬಹು ಆಯ್ಕೆ ಪ್ರಶ್ನೆಗಳನ್ನು ಸಿದ್ಧಪಡಿಸಿ ಅದರ ಆಧಾರದಲ್ಲಿ ಪರೀಕ್ಷೆ ನಡೆಸಿ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸಬೇಕಾಗಿದ್ದರಿಂದ ಹಾಗೂ ದಾಖಲೆಗಳ ಪರಿಶೀಲನೆ ನಡೆಸಬೇಕಾಗಿದ್ದರಿಂದ ಆಯ್ಕೆ ಪ್ರಕ್ರಿಯೆಯು ವಿಳಂಬವಾಗಿರುತ್ತದೆ. |

--2

| | | |
|---|---|---|
| ಊ) | ಯಾವ ಕಾಲಮಿತಿಯಲ್ಲಿ ಜೆ.ಟಿ.ಒ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲಾಗುವುದು? | ಕರ್ನಾಟಕ ಲೋಕಸೇವಾ ಆಯೋಗದಿಂದ ಪ್ರಸ್ತುತ 46 ಕಿರಿಯ ತರಬೇತಿ ಅಧಿಕಾರಿಗಳ ಅಂತಿಮ ಆಯ್ಕೆ ಪಟ್ಟಿ ಸ್ವೀಕೃತಗೊಂಡಿದ್ದು, ಸದ್ಯದಲ್ಲೇ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗುವುದು. ಉಳಿದ 1296 ಕಿರಿಯ ತರಬೇತಿ ಅಧಿಕಾರಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಕರ್ನಾಟಕ ಲೋಕಸೇವಾ ಆಯೋಗವು ಪ್ರಕಟಿಸಿದ್ದು, ಸದ್ಯದಲ್ಲಿಯೇ ಅಂತಿಮ ಆಯ್ಕೆ ಪಟ್ಟಿಯನ್ನು ಕಳುಹಿಸುವುದಾಗಿ ಕರ್ನಾಟಕ ಲೋಕಸೇವಾ ಆಯೋಗವು ತಿಳಿಸಿದೆ. ಅಂತಿಮ ಆಯ್ಕೆ ಪಟ್ಟಿ ಸ್ವೀಕೃತಗೊಂಡ ಕೂಡಲೇ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಿ ಖಾಲಿ ಇರುವ ಕಿರಿಯ ತರಬೇತಿ ಅಧಿಕಾರಿಗಳ ಹುದ್ದೆಗಳಿಗೆ ನಿಯುಕ್ತಿಗೊಳಿಸಲಾಗುವುದು. |

**ಸಂಖ್ಯೆ: ಕೌಉಜೀಇ 13 ಕೈತಪ್ರ 2022**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು